# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 130
ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 01-02-2021
ಉತ್ತರಿಸಬೇಕಾದ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಪ್ರಶ್ನೆ | ಉತ್ತರ |
|---|---|
| **ಅ)** 1995ರ ನಂತರ ಪ್ರಾರಂಭವಾದ ಶಾಲಾ-ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಪ್ರಸ್ತಾವನೆ ಇದೆ. |
| **ಆ)** ಕಳೆದ 25 ವರ್ಷ ಈ ಶಾಲಾ-ಕಾಲೇಜುಗಳಲ್ಲಿನ ಸಿಬ್ಬಂದಿಗಳು ಕಡಿಮೆ ಸಂಬಳಕ್ಕೆ ಸೇವೆ ಸಲ್ಲಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಖಾಸಗಿ ಅನುದಾನರಹಿತ ಶಾಲಾ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರು/ಉಪನ್ಯಾಸಕರುಗಳಿಗೆ ಆ ಹುದ್ದೆಯ ಕನಿಷ್ಠ ವೇತನವನ್ನು ಪಾವತಿ ಮಾಡುವಂತೆ ಕರ್ನಾಟಕ ಶಿಕ್ಷಣ ಕಾಯ್ದೆ 1983 ಸೆಕ್ಷನ್ 89ರಡಿ 1999ರಲ್ಲಿ ನಿಯಮಗಳನ್ನು ರೂಪಿಸಲಾಗಿದ್ದು, ಅದರಂತೆ, ರಾಜ್ಯದಲ್ಲಿನ ಎಲ್ಲಾ ಖಾಸಗಿ ಅನುದಾನ ರಹಿತ ಶಾಲಾ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶಿಕ್ಷಕರಿಗೆ ಕನಿಷ್ಠ ವೇತನವನ್ನು ನೀಡಬೇಕಾಗಿರುತ್ತದೆ. |
| **ಇ)** ಇವರಿಗೆ ನ್ಯಾಯ ದೊರಕಿಸುವ ನಿಟ್ಟಿನಲ್ಲಿ 1995ರ ನಂತರದ ಶಾಲಾ-ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ದಿನಾಂಕ :14.01.2020ರಂದು ವಿವಿಧ ಕನ್ನಡ ಮಾಧ್ಯಮ ಶಾಲಾ ವ್ಯವಸ್ಥಾಪಕ ಮಂಡಳಿಗಳ ಪ್ರತಿನಿಧಿಗಳ ಜೊತೆ ನಡೆದ ಸಭೆಯಲ್ಲಿ 1995ರ ನಂತರದಲ್ಲಿ ಪ್ರಾರಂಭವಾದ ಖಾಸಗಿ ಅನುದಾನ ರಹಿತ ಕನ್ನಡ ಮಾಧ್ಯಮ ಶಾಲಾ ಕಾಲೇಜುಗಳನ್ನು ಸಹಾಯಾನುದಾನಕ್ಕೆ ಒಳಪಡಿಸುವ ಕುರಿತಂತೆ ಚರ್ಚಿಸಲಾಗಿದೆ. 1995 ರಿಂದ 2018ರವರೆಗೆ ಪ್ರತಿ 5 ವರ್ಷದ ಬ್ಲಾಕ್ ಅವಧಿಗೆ ಒಟ್ಟು ಕನ್ನಡ ಮಾಧ್ಯಮ ಶಾಲಾ ಕಾಲೇಜುಗಳ ಸಂಖ್ಯೆಯನ್ನು ಅವುಗಳ ಹೆಸರಿನೊಂದಿಗೆ ಮತ್ತು ಒಟ್ಟು ಶಿಕ್ಷಕರುಗಳ ಸಂಖ್ಯೆಯನ್ನು ಹಾಗೂ ಅಂದಾಜು ವೆಚ್ಚದ ಮಾಹಿತಿಯನ್ನು ನೀಡಿದ್ದಲ್ಲಿ ಈ ಬೇಡಿಕೆಯ ಕುರಿತಂತೆ ನಿರ್ಣಯಿಸಲು ಸಾಧ್ಯವಾಗುತ್ತದೆ ಎಂದು ಮನಗಂಡು, ಪ್ರತಿ 5 ವರ್ಷಕ್ಕೆ ಸೀಮಿತಗೊಳಿಸಿ ಮಾಹಿತಿಯನ್ನು ಕ್ರೋಢೀಕರಿಸಲು ನಿರ್ಧರಿಸಿದ್ದು, ಅದರಂತೆ ಕ್ರೋಢೀಕೃತ ಮಾಹಿತಿಯನ್ನು ಪಡೆಯುವ ಹಂತದಲ್ಲಿದೆ. |

ಇಪಿ 17 ಪಿಎಂಸಿ 2021

[ ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.